# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 639
ಸದಸ್ಯರ ಹೆಸರು : ಶ್ರೀ ನಸೀರ್ ಅಹಮದ್
(ವಿಧಾನಸಭೆ ಕ್ಷೇತ್ರದಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
| --- | --- | --- |
| ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ನೌಕರರ ಕ್ಷೇಮಾಭಿವೃದ್ಧಿ ಸಂಘಕ್ಕೆ ಪ್ರಾಧಿಕಾರದಿಂದ ಬಿಡುಗಡೆಯಾಗಿರುವ ಜಮೀನು ಎಷ್ಟು; (ಸ್ಥಳ ಸರ್ವೆ ನಂಬರ್ ಮತ್ತು ಸರ್ವೆ ನಂಬರ್ ವಿಸ್ತೀರ್ಣವಾರು ವಿವರ ನೀಡುವುದು) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ನೌಕರರ ಕ್ಷೇಮಾಭಿವೃದ್ಧಿ ಸಂಘಕ್ಕೆ ಪ್ರಾಧಿಕಾರದಿಂದ ಬಿಡುಗಡೆಯಾಗಿರುವ ಒಟ್ಟು ಜಮೀನಿನ ವಿಸ್ತೀರ್ಣ 42 ಎಕರೆ 16 ½ ಗುಂಟೆ ಆಗಿರುತ್ತದೆ. (ಸ್ಥಳ ಸರ್ವೆ ನಂಬರ್ ಮತ್ತು ಸರ್ವೆ ನಂಬರ್ ವಿಸ್ತೀರ್ಣವಾರು ವಿವರಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ.) |
| ಆ) | ದೊಡ್ಡಕಲ್ಲಸಂದ್ರ ಸರ್ವೆ ನಂ. 19 ಮತ್ತು ಲಿಂಗಧೀರನ ಹಳ್ಳಿಯ ಸರ್ವೆ ನಂ. 1/4(ಪಿ), 7/5(ಪಿ), 7/6(ಪಿ), 7/8(ಪಿ) ಮತ್ತು 7/9(ಪಿ) ಗಳಲ್ಲಿ ಜಮೀನುಗಳನ್ನು ಅಕ್ರಮವಾಗಿ ಅನುಮೋದಿತ ನಕ್ಷೆಯಲ್ಲಿ ಸೇರಿಸಿರುವುದು ನಿಜವೆ; ಇಲ್ಲದಿದಲ್ಲಿ, ಸದರಿ ಸರ್ವೆ ನಂಬರ್‌ವಾರು ಜಮೀನಿನ ವಿಸ್ತೀರ್ಣದ ವಿವರ ಮತ್ತು ಕ್ರಯಪತ್ರಗಳನ್ನು ನೀಡುವುದು; ಅಕ್ರಮವಾಗಿ ಸೇರಿಸಿದ್ದಲ್ಲಿ ಈ ಅಕ್ರಮಕ್ಕೆ ಕಾರಣವಾದ ಅಧಿಕಾರಿ ನೌಕರರ ಹೆಸರು ಮತ್ತು ಅವರುಗಳ ವಿರುದ್ಧ ಕೈಗೊಂಡ ಕ್ರಮಗಳೇನು ಹಾಗೂ ಈ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಪ್ರಾಧಿಕಾರ ಕೈಗೊಳ್ಳುವ ಕ್ರಮಗಳೇನು; | ಸಂಘದ ಪರವಾಗಿ ಸಗಟು ಹಂಚಿಕೆಯಾಗಿ, ಅನುಮೋದಿತ ವಸತಿ ಬಡಾವಣೆ ನಕ್ಷೆಯಲ್ಲಿ ಸಿ.ಎ. ಮತ್ತು ಉದ್ಯಾನವನ/ಬಯಲು ಜಾಗಕ್ಕಾಗಿ ಕಾಯ್ದಿರಿಸಿದ್ದ ಸರ್ವೆ ನಂ.17 ರಲ್ಲಿನ 02 ಎಕರೆ ಪ್ರದೇಶವನ್ನು ಮುಸಲ್ಮಾನರ್ ರುದ್ರಭೂಮಿಗಾಗಿ ಬೆಂಗಳೂರು ಜಿಲ್ಲೆ ಜಿಲ್ಲಾಧಿಕಾರಿಗಳು ಹಂಚಿಕೆ ಮಾಡಿದ್ದರಿಂದ ಸರ್ವೆ ನಂ.19 ರಲ್ಲಿನ 01 ಎಕರೆ 28 ಗುಂಟೆ ಪ್ರದೇಶವನ್ನು ಉದ್ಯಾನವನಕ್ಕಾಗಿಯೇ ಕಾಯ್ದಿರಿಸಿ ಒಟ್ಟು 27 ಎಕರೆ 15.80 ಗುಂಟೆ ವಿಸ್ತೀರ್ಣಕ್ಕೆ ಅಸೋಷಿಯೇಷನ್ ರವರ ಪರವಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಮಿತಿ ಸಭೆಯ ತೀರ್ಮಾನದಂತೆ, ಮಾರ್ಪಡಿತ ವಸತಿ ಬಡಾವಣೆ ನಕ್ಷೆ ಅನುಮೋದಿಸಲಾಗಿದೆಯೇ ಹೊರತು ಸರ್ವೆ ನಂ.19 ರಲ್ಲಿನ 01 ಎಕರೆ 28 ಗುಂಟೆ ಪ್ರದೇಶವು ಹೆಚ್ಚುವರಿಯಾಗಿ ಅಸೋಷಿಯೇಷನ್ ಪರವಾಗಿ ಅನುಮೋದಿತವಾಗಿರುವ ಮಾರ್ಪಡಿತ ವಸತಿ ಬಡಾವಣೆ ನಕ್ಷೆಯಲ್ಲಿ ಒಳಗೊಂಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ:19ಕ್ಕೆ ಪ್ರತ್ಯೇಕವಾಗಿ ಸಂಘದವರು ಕ್ರಯಪತ್ರ ಮಾಡಿಕೊಂಡಿರುವುದಿಲ್ಲ.<br>ಲಿಂಗಧೀರನಹಳ್ಳಿಯ ಸರ್ವೆ ನಂ. 1/4(ಪಿ), 7/5(ಪಿ), 7/6(ಪಿ), 7/8(ಪಿ) ಮತ್ತು 7/9(ಪಿ) ಗಳ 15 ಎಕರೆ ಜಮೀನುಗಳ ವಿಸ್ತೀರ್ಣದ ಅನುಮೋದಿತ ನಕ್ಷೆಯಲ್ಲಿ ಸೇರಿಸಿರುತ್ತದೆ. ಆದರೆ ಶುದ್ಧಕ್ರಯಪತ್ರ ನೋಂದಾಯಿಸಿಕೊಡುವ ಸಂದರ್ಭದಲ್ಲಿ ಸರ್ವೆ ನಂ.1/4(ಪಿ) ಅನ್ನು ಷಡ್ಯೂಲ್‌ನಲ್ಲಿ ನಮೂದಿಸಿರುವುದಿಲ್ಲ. ಈ ಬಗ್ಗೆ ತಿದ್ದುಪಡಿ ಕ್ರಯಪತ್ರವನ್ನು ಮಾಡಿಕೊಡಬೇಕಾಗಿರುತ್ತದೆ.<br>ಈ ಅಕ್ರಮಕ್ಕೆ ಕಾರಣರಾದ ಅಧಿಕಾರಿಯವರನ್ನು |

| | | |
|---|---|---|
| | | ಪ್ರಾಧಿಕಾರದ ಸೇವೆಯಿಂದ ಅಮಾನತ್ತಿನಲ್ಲಿಟ್ಟಿದ್ದು, ನಂತರ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಧಿಕಾರಿಯವರನ್ನು ಸೇವೆಗೆ ಪುನರ್‌ಸ್ಥಾಪಿಸಲಾಗಿದೆ.<br>ದೊಡ್ಡಕಲ್ಲಸಂದ್ರ ಸರ್ವೆ ನಂ.19ರಲ್ಲಿ 01 ಎಕರೆ 28 ಗುಂಟೆ ಜಮೀನಿನ ವಿಸ್ತೀರ್ಣವನ್ನು ಉದ್ಯಾನವನವನ್ನಾಗಿ ಕಾಯ್ದಿರಿಸಿ ಅನುಮೋದಿತ ನಕ್ಷೆಯಲ್ಲಿ ಸೇರಿಸಿದ್ದರಿಂದ ಸದರಿ ಜಾಗವನ್ನು ಉದ್ಯಾನವನವನ್ನಾಗಿಯೇ ಉಳಿಸಿಕೊಳ್ಳಲಾಗಿದೆ. |
| ಇ) | ಲಿಂಗಧೀರನಹಳ್ಳಿ ಬಡಾವಣೆಯಲ್ಲಿ ರಚಿತವಾದ ಒಂದು ಎಕರೆ ವಿಸ್ತೀರ್ಣದ ಸಿ.ಎ.ನಿವೇಶನ ಅಕ್ರಮವಾಗಿ ಮಾರಾಟವಾಗಿದ್ದು ನಿಜವೆ; ಇದ್ದಲ್ಲಿ ಈ ಅಕ್ರಮಕ್ಕೆ ಕಾರಣರಾದವರ ವಿರುದ್ಧ ಕೈಗೊಂಡಿರುವ ಕ್ರಮಗಳೇನು; ವಿವರ ನೀಡುವುದು ಹಾಗೂ ಪ್ರಸ್ತುತ ಪ್ರಾಧಿಕಾರವು ಸಿ.ಎ.ನಿವೇಶನವನ್ನು ವಶಪಡಿಸಿಕೊಂಡಿದೆಯೆ; | ಲಿಂಗಧೀರನಹಳ್ಳಿ ಬಡಾವಣೆಯಲ್ಲಿ ರಚಿತವಾದ ಒಂದು ಎಕರೆ ವಿಸ್ತೀರ್ಣದ ಸಿ.ಎ.ನಿವೇಶನ ಮಾರಾಟವಾಗಿರುತ್ತದೆ.<br>ಈ ರೀತಿ ಸಿ.ಎ.ನಿವೇಶನವನ್ನು ಮಾರಾಟ ಮಾಡಲು ಕಾರಣಕರ್ತರಾದ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರಿಂದ ಅಕ್ರಮವಾಗಿ ಮಾರಾಟ ಮಾಡಲಾಗಿದ್ದ ಸಿ.ಎ.ನಿವೇಶನವನ್ನು ದಿನಾಂಕ:22.01.2020 ರಂದು ದಾಸ್ತಾವೇಜು ಸಂಖ್ಯೆ:9318 ಮುಖಾಂತರ ಮರುಸ್ಥಿರೀಕರಣ ಪತ್ರ ನೋಂದಾಯಿಸುವ ಮೂಲಕ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.<br>ಪ್ರಸ್ತುತ ಪ್ರಾಧಿಕಾರವು ಸಿ.ಎ.ನಿವೇಶನವನ್ನು ವಶಪಡಿಸಿಕೊಂಡಿರುತ್ತದೆ. |
| ಈ) | ಸಂಘದಿಂದ ನಿವೇಶನ ಸಿಗದೇ ವಂಚನೆಗೊಳಗಾಗಿರುವ ಪ್ರಾಧಿಕಾರ ನಿವೃತ್ತ ನೌಕರರಿಗೆ ನಿವೇಶನಗಳನ್ನು ಒದಗಿಸಿಕೊಡುವ ದಿಸೆಯಲ್ಲಿ ಜರುಗಿರುವ ಕ್ರಮಗಳೇನು? | ಸಂಘದಿಂದ ನಿವೇಶನ ಸಿಗದೇ ವಂಚನೆಗೊಳಗಾಗಿರುವ ಪ್ರಾಧಿಕಾರದ ನಿವೃತ್ತ ನೌಕರರಿಗೆ ನಿವೇಶನಗಳನ್ನು ಒದಗಿಸಿಕೊಡುವ ದಿಸೆಯಲ್ಲಿ ಕೈಗೊಳ್ಳುವ ಕ್ರಮದ ಮುನ್ನ ಹಕ್ಕುಭಾದ್ಯತ ಸಮಿತಿ ಸಭೆಯ ದಿನಾಂಕ:22.05.2020 ರ ಶಿಫಾರಸ್ಸಿನಂತೆ ಕ್ರಮಕೈಗೊಳ್ಳಲು ಪ್ರಾಧಿಕಾರದಿಂದ ಸರ್ಕಾರದ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಲು ಕ್ರಮಕೈಗೊಳ್ಳಲಾಗುತ್ತಿದೆ. |

ನಅಇ 26 ಬೆಂಅಸೇ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿಗಳು

"ಅನುಬಂಧ-7"

## ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ನೌಕರರು ಕ್ಷೇಮಾಭಿವೃದ್ಧಿ ಸಂಘಕ್ಕೆ ಸಗಟು ಹಂಚಿಕೆಯಡಿ ನೀಡಲಾಗಿರುವ ಒಟ್ಟು ಜಮೀನು ವಿವರ

| ಕ್ರಮ ಸಂಖ್ಯೆ | ಸರ್ವೆ ನಂ | ಗ್ರಾಮ | ವಿಸ್ತೀರ್ಣ | | ನೋಂದಣಿ ವಿವರ | | ಷರಾ |
|---|---|---|---|---|---|---|---|
| | | | ಎಕರೆ | ಗುಂಟೆ | ಕ್ರಯಪತ್ರ ದಿನಾಂಕ | ಸ್ವಾಧೀನ ಪತ್ರ ದಿನಾಂಕ | |
| 1 | 15, 16 ಮತ್ತು 17 | ದೊಡ್ಡಕಲ್ಲಸಂದ್ರ | 27 | 15 1/2 | 09.11.2006 | 09.11.2006 | ವಾಸ್ತವವಾಗಿ ಸರ್ವೆ ನಂ. 15, 16 ಮತ್ತು 17 ರ ಜಮೀನು 27 ಎಕರೆ 15 1/2 ಗುಂಟೆ ಮಾತ್ರ ಎಂದು ದಿನಾಂಕ: 12.06.2013 ರಂದು ತಿದ್ದುಪಡಿ ಪತ್ರ ನೋಂದಾಯಿಸಲಾಗಿದೆ. |
| 2 | 06 (ಭಾಗ) | ಲಿಂಗಧೀರನಹಳ್ಳಿ | 07 | 00 | 13.06.2007 | 13.06.2007 | |
| 3 | 06 (ಭಾಗ) ಮತ್ತು 07 (ಭಾಗ) | ಲಿಂಗಧೀರನಹಳ್ಳಿ | 05 | 00 | 14.11.2007 | 14.11.2007 | |
| 4 | 06 (ಭಾಗ) ಮತ್ತು 07 (ಭಾಗ) | ಲಿಂಗಧೀರನಹಳ್ಳಿ | 03 | 01 | 28.06.2011 | 28.06.2011 | |
| | | ಒಟ್ಟು | 42 | 16 1/2 | | | |

ಉಪ ಕಾರ್ಯದರ್ಶಿ-1
ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
ಬೆಂಗಳೂರು-20
21/9/2020